# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 844 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶಶೀಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 20.12.2021 |

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಸರ್ಕಾರದ ಅನುದಾನದಲ್ಲಿ ಸ್ಥಾಪಿಸಲ್ಪಟ್ಟ ವಿಶ್ವವಿದ್ಯಾಲಯಗಳು ಎಷ್ಟು; (ವಿವರ ನೀಡುವುದು) ಸದರಿ ವಿಶ್ವವಿದ್ಯಾಲಯಗಳಲ್ಲಿ ಮಂಜೂರಾಗಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳೆಷ್ಟು; (ವಿಶ್ವವಿದ್ಯಾಲಯವಾರು ವಿವರ ನೀಡುವುದು) ಸದರಿ ವಿಶ್ವವಿದ್ಯಾಲಯಗಳಲ್ಲಿ ಖಾಲಿ ಇರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳೆಷ್ಟು; (ವಿಶ್ವವಿದ್ಯಾಲಯವಾರು ವಿವರ ನೀಡುವುದು) | ರಾಜ್ಯದಲ್ಲಿ ಸರ್ಕಾರದ ಅನುದಾನದಲ್ಲಿ ಸ್ಥಾಪಿಸಲ್ಪಟ್ಟ ವಿಶ್ವವಿದ್ಯಾಲಯಗಳು ಒಟ್ಟು 23.<br><br>ಸದರಿ ವಿಶ್ವವಿದ್ಯಾಲಯಗಳಲ್ಲಿ ಮಂಜೂರಾಗಿರುವ, ಖಾಲಿಯಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳ ವಿವರ ಈ ಕೆಳಕಂಡಂತಿದೆ; |

| ಕ್ರ ಸಂ. | ವಿಶ್ವವಿದ್ಯಾಲಯದ ಹೆಸರು | ಬೋಧಕ | | ಬೋಧಕೇತರ | |
|---|---|---|---|---|---|
| | | ಮಂಜೂರಾದ ಹುದ್ದೆ | ಖಾಲಿ ಇರುವ ಹುದ್ದೆ | ಮಂಜೂರಾದ ಹುದ್ದೆ | ಖಾಲಿ ಇರುವ ಹುದ್ದೆ |
| 1 | ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ | 151 | 59 | 137 | 97 |
| 2 | ಕನ್ನಡ ವಿಶ್ವವಿದ್ಯಾಲಯ | 73 | 21 | 234 | 75 |
| 3 | ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯ | 120 | 35 | 272 | 140 |
| 4 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ | 137 | 61 | 574 | 211 |
| 5 | ಗುಲ್ಬರ್ಗ ವಿಶ್ವವಿದ್ಯಾಲಯ | 248 | 191 | 707 | 502 |
| 6 | ಬೆಂಗಳೂರು ನಗರ ವಿಶ್ವವಿದ್ಯಾಲಯ | 161 | 145 | 123 | 114 |
| 7 | ಕರ್ನಾಟಕ ಜಾನಪದ ವಿಶ್ವವಿದ್ಯಾಲಯ | 56 | 56 | ಬೋಧಕ + ಬೋಧಕೇತರ ಎರಡನ್ನೂ ಒಳಗೊಂಡಂತೆ | |
| 8 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ | 103 | 38 | 173 | 157 |
| 9 | ತುಮಕೂರು ವಿಶ್ವವಿದ್ಯಾಲಯ | 217 | 85 | 214 | 168 |
| 10 | ದಾವಣಗೆರೆ ವಿಶ್ವವಿದ್ಯಾಲಯ | 164 | 149 | 178 | 149 |
| 11 | ಕುವೆಂಪು ವಿಶ್ವವಿದ್ಯಾಲಯ | 238 | 56 | 590 | 298 |
| 12 | ಮೈಸೂರು ವಿಶ್ವವಿದ್ಯಾಲಯ | 664 | 382 | 1349 | 802 |
| 13 | ಬೆಂಗಳೂರು ವಿಶ್ವವಿದ್ಯಾಲಯ | 504 | 269 | 1383 | 851 |
| 14 | ಕರ್ನಾಟಕ ರಾಜ್ಯ ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ | 15 | 15 | 19 | 02 |
| 15 | ಕರ್ನಾಟಕ ವಿಶ್ವವಿದ್ಯಾಲಯ | 679 | 431 | 1368 | 952 |
| 16 | ಸಂಸ್ಕೃತ ವಿಶ್ವವಿದ್ಯಾಲಯ | 71 | 32 | 62 | 24 |
| 17 | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ | 228 | 86 | 425 | 191 |
| 18 | ಬೆಂಗಳೂರು ಉತ್ತರ ವಿಶ್ವವಿದ್ಯಾಲಯ | 56 | 50 | 92 | 84 |
| 19 | ಮಂಗಳೂರು ವಿಶ್ವವಿದ್ಯಾಲಯ | 273 | 105 | 547 | 321 |

| | | | | | |
|---|---|---|---|---|---|
| 20 | ರಾಯಚೂರು ವಿಶ್ವವಿದ್ಯಾನಿಲಯ | ಈ ವಿಶ್ವವಿದ್ಯಾನಿಲಯಗಳು 2020ನೇ ಸಾಲಿನಿಂದ ಪ್ರಾರಂಭಗೊಂಡಿದ್ದು, ಪ್ರಸ್ತುತ ಯಾವುದೇ ಬೋಧಕ/ಬೋಧಕೇತರ ಹುದ್ದೆಗಳು ಸೃಜನೆಯಾಗಿರುವುದಿಲ್ಲ. | | | |
| 21 | ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾನಿಲಯ | | | | |
| 22 | ನೃಪತುಂಗ ವಿಶ್ವವಿದ್ಯಾನಿಲಯ | | | | |
| 23 | ಮಂಡ್ಯ ವಿಶ್ವವಿದ್ಯಾನಿಲಯ | | | | |
| | **ಒಟ್ಟು** | **4158** | **2266** | **8447** | **5138** |

| | | |
|---|---|---|
| (ಆ) | ಖಾಲಿ ಹುದ್ದೆಗಳ ಕಾರಣ ಉನ್ನತ ಶಿಕ್ಷಣದ ಗುಣಮಟ್ಟ ಕುಸಿಯುತ್ತಿರುವುದು ಸರ್ಕಾರದ ಗಮನಕ್ಕೆ ಇದೆಯೇ; ಹಾಗಿದ್ದಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮವೇನು; | ವಿಶ್ವವಿದ್ಯಾನಿಲಯಗಳು ಅತಿಥಿ/ತಾತ್ಕಾಲಿಕ ಉಪನ್ಯಾಸಕರನ್ನು ನೇಮಿಸಿಕೊಂಡು ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸುತ್ತಿರುವುದರಿಂದ, ಶಿಕ್ಷಣದ ಗುಣಮಟ್ಟ ಕುಸಿಯುತ್ತಿದೆ ಎಂಬ ಪ್ರಶ್ನೆ ಉದ್ಭವಿಸುವುದಿಲ್ಲ.<br><br>ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಬೋಧಕ ಹುದ್ದೆಗಳನ್ನು ನೇರ ನೇಮಕಾತಿ ಮಾಡಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಭರ್ತಿ ಮಾಡಲು ಸರ್ಕಾರದ ಆದೇಶ ಸಂಖ್ಯೆ: ಇಡಿ 136 ಯುಎನ್ಇ 2017, ಬೆಂಗಳೂರು 03.06.2019ರಲ್ಲಿ ಆದೇಶ ಹೊರಡಿಸಲಾಗಿದೆ.<br><br>ಬೋಧಕೇತರ ಹುದ್ದೆಗಳಿಗೆ ಸಂಬಂಧಿಸಿದಂತೆ, ಎಲ್ಲಾ ವಿಶ್ವವಿದ್ಯಾನಿಲಯಗಳು ಈಗಾಗಲೇ ರಚಿಸಿಕೊಂಡಿರುವ ಪರಿನಿಯಮಾವಳಿಗಳನ್ವಯ/ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನೇಮಕಾತಿ ಮಾಡಲಾಗುತ್ತದೆ.<br><br>ಪ್ರಸ್ತುತ ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಆಇ 03 ಬಿಇಎಂ 2020, ದಿನಾಂಕ: 06.07.2020ರಲ್ಲಿ ವಿಧಿಸಿರುವ ಆರ್ಥಿಕ ನಿರ್ಬಂಧದನ್ವಯ ಕಲ್ಯಾಣ ಕರ್ನಾಟಕ ಪ್ರದೇಶಗಳನ್ನು ಹೊರತು ಪಡಿಸಿ ನೇರ ನೇಮಕಾತಿ ಪ್ರಕ್ರಿಯೆಯನ್ನು ತಡೆಹಿಡಿಯಲಾಗಿದೆ. ಆರ್ಥಿಕ ನಿರ್ಬಂಧಗಳು ತೆರವುಗೊಂಡ ನಂತರ ಈ ಬಗ್ಗೆ ವಿಶ್ವವಿದ್ಯಾನಿಲಯಗಳಿಗೆ ಸದರಿ ಹುದ್ದೆಗಳನ್ನು ಭರ್ತಿ ಮಾಡಲು ನಿಯಮಾನುಸಾರ ಕ್ರಮಕೈಗೊಳ್ಳುವಂತೆ ತಿಳಿಸಲಾಗುವುದು. |
| (ಇ) | ವಿಶ್ವವಿದ್ಯಾಲಯಗಳಲ್ಲಿ ಖಾಲಿ ಇರುವ ಸಹಾಯಕ ಪ್ರಾಧ್ಯಾಪಕರ ಹುದ್ದೆ ಹಾಗೂ ಬೋಧಕೇತರ ಹುದ್ದೆಗಳನ್ನು ನೇರ ನೇಮಕಾತಿ ಮಾಡಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರ ಮೂಲಕ ಭರ್ತಿ ಮಾಡಲು ಸರ್ಕಾರ ಇಚ್ಛಿಸಿದೆಯೇ; ಹಾಗಿದ್ದಲ್ಲಿ, ನೇರ ನೇಮಕಾತಿಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರ ಮೂಲಕ ಭರ್ತಿ ಮಾಡಲು ಸರ್ಕಾರ ಕೈಗೊಂಡ ಕ್ರಮವೇನು? | |

ಸಂಖ್ಯೆ: ಇಡಿ 349 ಯುಎನ್ಇ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು